ಅಂಬಿಕಾತನಯದತ್ತರ



# ಕನ್ನಡ ಮೇಘದೂತ

# ಉತ್ತರ ಮೇಘ



"ನಿವರ್ತಸ್ವ ಹೃದಯಂ ತಪ್ಯತೇ ಮೇ"



೧

ಮಿಂಚನುಳ್ಳ ಎಳೆವೆಂಡಿರುಳ್ಳ, ಮಳೆಬಿಲ್ಲ ಬಣ್ಣ ತಾಳಿ,
ಹಾಡಿಗಾಗಿ ಗುಡುಗುಡುಗಿದಂತೆ ಮದ್ದಳೆಯ ಸೊಲ್ಲ ಹೇಳಿ ॥
ಮುಗಿಲ ಮುಟ್ಟ ಕರುಮಾಡ ಮುತ್ತು ರತುನಗಳ ನೀರು ತುಂಬಿ
ಇಹವು ಇಂಥ ಮಹಮನೆಗಳಲ್ಲಿ ಅವು ನಿನಗೆ ಸಾಟಿ ಎಂಬಿ ॥

೨

ಮಾಟ ತಾವರೆಯು ಕೈಗೆ, ಕುರುಳಿನಲಿ ಬಾಲಕುಂದ ಮಾಲೆ,
ಲೋಧ್ರ ಪುಷ್ಪಗಳ ಸೂಸು ಹುಡಿಯು ಚೆಲುವಾದ ಮೊಗದ ಮೇಲೆ ॥
ಚೆಂದ ಕುರುವಕವು ಹೆಳಲಿನಲ್ಲಿ, ಸಿರಸಲವು ಕಿವಿಯ ಬಳಿಗೆ
ಬೈತಲಲ್ಲಿ ಕಡವಾಲ ಹೂವು ಅಲ್ಲಿರುವ ಹೆಣ್ಣುಗಳಿಗೆ ॥

೩

ಯಕ್ಷರಲ್ಲಿ , ಬಿಳಿ ಹರಳಿನಿಂದ ರಚಿಸಿರುವ ಸೌಧಗಳಲಿ,
ಚುಕ್ಕಿ ನೆರಳೆ ಅರಳಾಗಿ ಹಾಸೆ, ನಲುವೆಣ್ಣ ತೋಳುಗಳಲಿ ॥
ನಿನ್ನ ಗುಡುಗಿನೊಡಗೂಡಿ ನುಡಿಸುವರು ವಾದ್ಯವಾದ್ಯವಾಗಿ
ಬಯಕೆ-ತಾಳೆ-ಹಾಲನ್ನು ಕುಡಿವರೋ ಕಾಮಕೇಳಿಗಾಗಿ ॥

೪

ನಂದನಂಗಳಲಿ ಗಂಗೆ ಮಿಂದ ತಂಗಾಳಿ ಹಾಯುವಲ್ಲಿ
ಅಲ್ಲೆ ತೀರದಲಿ ಬಿಸಿಲ ಮರೆಸಿ ಮಂದಾರ ಛಾಯೆಯಲ್ಲಿ ॥
ಹೊನ್ನ ಮಳಲು ಮಣಿ ತೂರಿ ಆಡುವರು ಹುಟ್ಟುಜವ್ವನಿಯರು
ಅಮರರಿಂದ ಪ್ರಾರ್ಥಿತರು ಆಗುವರು ಅಮರ ಕನ್ನಿಕೆಯರು ॥

೫

ಉಟ್ಟ ರೇಸಿಮೆಯ ನೀರಿ ಸೆಳೆಯೆ ಆತುರದ ಕರಗಳಿಂದಾ
ಮತ್ತೆ ಜರೆಯಲಿರೆ ಮೊದಲೆ ಸಡಲಿದಾ ಕಟಿಯ ನೀವಿಬಂಧ ॥
ತೊಂಡೆ ತುಟಿಯ ಮರುಳೆಯರು ಪ್ರಿಯರಿದಿರು ನಾಚಿ ಬಳುಕಿ ಬಗ್ಗಿ
ರತ್ನದೀಪ ನಂದಿಸಲು ಹವಣಿಪರು ಸುಳ್ಳೆ ಹುಡಿಯನುಗ್ಗಿ ॥

೬

ಬಿಡದೆ ಬೀಸುವಾ ಗಾಳಿಯೊಡನೆ ಮನೆಯೇಳು ನೆಲೆಯನೇರಿ
ಅಲ್ಲಿ ಗೊಂಬೆಗಳನಂದಗೆಡಿಸಿ ಹನಿಯಿಂದ, ಹೆದರಿ ಜಾರಿ ॥
ತಪ್ಪಿತಸ್ಥರೆನೆ ಕಂಡಿಯಿಂದ ಹೊರಬೀಳತಾವ ನೂಗಿ
ಮರಳಿ ಮೋಡ ತೊಟ್ಟಿಕ್ಕತಾವ ಹರಿ ಹಿಂಜು ಮಂಜು ಆಗಿ ॥





೨
ಮಾಟ ತಾವರೆಯು ಕೈಗೆ..........................

೭
ಹೊದ್ದ ಮೋಡ ಹೊರಾಪಾಗಿ, ಬಿದ್ದ ಬೆಳದಿಂಗಳಿಂದ ಕುಸುರಿ
ಚಿಕ್ಕಿ ಚುಕ್ಕಿ ಸುರಿದಂತೆ ಕಿಟಿಕಿ-ತೆರೆ ಚಂದ್ರಕಾಂತ ಒಸರಿ
ಪ್ರಿಯರ ತಕ್ಕೆ ತೋಳೊಳಗೆ ಉಸುರು ಬಿಡುತಿರಲು ಹೆಂಗಳೊರಗಿ
ಕೂಟದಾಟದಾಸರವ ತಣಿಸುವವು ತಾವೆ ಮರುಗಿ ಕರಗಿ ॥
೮
ತೀರದಿರುವ ತವನಿಧಿಯು ತುಂಬಿದಾ ಕಾಮಿ ಜನರು ಕೂಡಿ
ಅಮರ ಗಣಿಕೆಯರ ಸಂಗದಲ್ಲಿ ಸರಸಾಽಲಾಪ ಮಾಡಿ ॥
ರಕ್ತಕಂಠಕಿನ್ನರರು ಧನದ ಯಶಗೀತ ಹಾಡೆ ಮೀರಿ
ಕಾಲ ಕಳೆಯುವರು ದಿನವು ಚೈತ್ರರಥವೆಂಬ ತೋಟ ಸೇರಿ ॥
೯
ದುಡುಕು ನಡಿಗೆಯಲಿ ಅಲಕದಿಂದ ಮಂದಾರ ಹೂವು ಉದುರಿ
ಬೀದಿಯುದ್ದಕೂ ಚಿಗುರುತಿಗುರು, ಕಿವಿಕನಕ-ಕಮಲ ಬಿದಿರಿ ॥
ನೂಲು ಹರಿದು ಎದೆಯುಜ್ಜಿ ಜರಿದು ಸರ ಮುತ್ತು ತೊಳಗತಾವ
**ಮತ್ತ-ಕಾಮಿಗಳ ಇರುಳ ಹಾದಿಯನು ಬೆಳಗು ಬೆಳಗತಾವ** ॥
೧೦
ಧನದ ಪತಿಯು ಜೊತೆಯಿವನು ಶಿವನು ಇಲ್ಲಿರುವನೆಂದು ಬಗೆದು
ಕಬ್ಬು-ತುಂಬಿ-ಹೂವುಗಳ ಬಿಲ್ಲು-ಹೆದೆ-ಬಾಣ ದೂರ ಒಗೆದು ॥
ಕಾಮಿಗಳಿಗೆ ಗುರಿಯಿಟ್ಟನಂಗನಿಹನಿಲ್ಲಿ ಕುಡಿಯ ಕಣ್ಗೆ
ಇಲ್ಲದಿದ್ದರೀ ಹುಬ್ಬ-ಬಿಲ್ಲಿನಲಿ ಮುರುಕವೇಕೊ ಹೆಣ್ಗೆ ॥
೧೧
ರಂಗು ರಂಗಿನಾ ಸೀರೆ, ಕಣ್ಣ ತಿರುಪಾಟವಾಡೆ ಮಧುವು,
ಹೂವು ಹೂವು, ಹಲಚಿಗುರು, ಒಡವೆ ತೊಡವಾಗಬಲ್ಲ ಒದವು :
ಅಡಿಯ ಕಡೆಯ ಕಾರಣೆಯ ಅರಗಿನಾ ಬಣ್ಣ , ಒಂದೆ ಎರಡೇ
**ಹೆಣ್ಣಿನೆಲ್ಲ ಸಿಂಗರವನೀವುದಾ ಕಲ್ಪವೃಕ್ಷ ಬರಡೇ ?** ॥
೧೨
ಅಲ್ಲಿ ನಮ್ಮ ಮನೆ, ಯಕ್ಷಪತಿಯ ಮನೆಯುತ್ತರಕ್ಕೆ ಇಹುದು
ಇಂದ್ರಚಾಪ ತೋರಣದಿ ಮೆರೆದು ದೂರಿಂದ ಕಾಣಬಹುದು ॥
ಹತ್ತಿರಕ್ಕೆ ನನ್ನಾಕೆ ನೀರನುಣಿಸಿರುವ ಕಂದನಾಗಿ
ಕೈ ಎತ್ತರಾದ ಮಂದಾರವೊಂದು ಇದೆ ಗೊಂಚಲಾಗಿ ಬಾಗಿ ॥



೩

ಯಕ್ಷರಲ್ಲಿ, ಬಿಳಿ ಹರಳಿನಿಂದ..............................



೧೩
ಪಚ್ಚೆಕಲ್ಲ ಮೆಟ್ಟಿಲುಗಳುಳ್ಳ ಹೊಕ್ಕರಣಿ ತುಂಬ ಅಗಲಾ
ಹೊನ್ನ ಕಮಲಗಳ ಕಾವು ಹೋಲುತಿದೆ ಹಸಿರು ನೀಲಿ ಮುಗಿಲಾ ॥
ಹತ್ತಿರಕ್ಕೆ ಮಾನಸವು ಇರಲಿ, ನೀ ಬರಲಿ ಮೇಲೆ ಠಾವು
ಬಿಡದೆ ಹಂಸ ನಮ್ಮಲ್ಲೆ ಆಡುವವು ತೃಪ್ತವಾಗಿ ತಾವು ॥

೧೪
ಮಾಟ-ಗುಡ್ಡ ಬಿಳಿನೀಲಿ ಮಣಿಯ ಕೋಡಾಗಿ ಅದರ ಬಳಿಗೆ
ಇಹುದು ಬೇಲಿ ಹೊಂಬಾಳೆಯಾಗಿ ಹವಣಾಗಿ ಸುತ್ತುವಳಿಗೆ ॥
ಅದುವು ಮುದ್ದು ನನ್ನಾಕೆಗಣ್ಣ , ಅದರಂತೆ ನಿನ್ನ ಮೋಡಿ
ಅದರ ನೆನಪೆ ನನಗಾಗುತಿಹುದು ಮಿಂಚುಳ್ಳ ನಿನ್ನ ನೋಡಿ ॥

೧೫
ಸುತ್ತುಮುತ್ತು ಮದರಂಗಿ, ನಡುವೆ ಮಾಧವಿಯ ಬಳ್ಳಿ ಮಾಡ
ಅತ್ತ ಚೆಂದ ಕೇಸರವು, ಇತ್ತಲಿದೆ ಕೆಂಪಶೋಕ ನೋಡಾ ॥
**ಒಂದು ಬೇಡುವದು ನಿನ್ನ ಸಖಿಯ ಎಡಗಾಲು ಸೋಂಕಲೆಂದು**
**ಮುಕ್ಕು ಮಧುವನುಗುಳಿದರೆ ಸಾಕು ಬಯಸುವದು ಮತ್ತಿನೊಂದು ॥**

೧೬
ಮರದ ನಡುವೆ ಬಿಳಿ ಹಾಸುಗಲ್ಲು ಬಂಗಾರ ಕೋಲು ನಡಕೆ
ಎಳೆ ಬಿದಿರ ಬಣ್ಣ ಬೆಲೆ ಹರಳಿನಿಂದ ನೆಲೆಗಟ್ಟು ಅದರ ಬುಡಕೆ ॥
**ಆ ಕೋಲಿನಲ್ಲಿ ಕುಣಿಸುವಳು ನವಿಲ ನನ್ನಾಕೆ ಸಂಜೆಯಲ್ಲಿ**
**ಕೈ ತಟ್ಟಿ ಮಾಟ, ಬಳೆ ತಾಕಲಾಟ, ಥಕಥೈಯ ಥಾಟಿನಲ್ಲಿ ॥**






೧೬

ಮರದ ನಡುವೆ ಬಿಳಿ ಹಾಸುಗಲ್ಲು.........................



೧೭

ಇಂತು ನಮ್ಮ ಮನೆ ಕಂಡುಕೊಳ್ಳು ನೀ ಬೇರೆ ಗುರುತೆ ಇದಕೆ
ಶಂಖ ಪದ್ಮಗಳು ದ್ವಾರಪಾಲರೊಲು ಎಡಕೆ ಬಲಕೆ ಇದಕೆ ॥
ಅಲ್ಲಿ ಬಣ್ಣಗುಂದಿರುವ ಮನೆಯು ತೋರುವದು ನನ್ನ ಒಲವಾ
**ಸೂರ್ಯನಿಲ್ಲದಿರೆ ಕಮಲವೆಂತು ತೋರೀತು ತನ್ನ ಚೆಲುವಾ** ॥

೧೮

ಆನೆ ಮರಿಯವೊಲು ಮಾಟವಾಗಿ ಒಳ ಸೇರು ಅಲ್ಲಿ ಹೋಗಿ
ಮೊದಲು ಹೇಳಿದಾ ಕೃತಕಶೈಲವನ್ನೇರು ಅರಸನಾಗಿ ॥
ನಿನ್ನ ಮಿಂಚುಗಣ್ಣನ್ನು ಮಿಟುಕಿಸುತ ಮಿಂಚುಹುಳವ ಮಾಡು
ಆಗ ನಮ್ಮ ಮನೆಯಲ್ಲಿ ನಿನ್ನ ನೋಟವನು ಚೆಲ್ಲಿ ನೋಡು ॥

೧೯

ಬಳ್ಳಿ ಮೈಯು, ನನೆಹಲ್ಲು, ಕೆಂಪು ತುಟಿ ಹಣ್ಣು ತೊಂಡೆಯಂತೆ
ಸಣ್ಣ ನಡುವು, ಚೆಲು ಹುಲ್ಲೆಗಣ್ಣು, ಕುಳಿ ನಾಭಿ ಸುಳಿಗಳಂತೆ ॥
ತುಂಬು ಎದೆಗೆ ನಸು ಬಾಗಿ, ಹರಹು ಹಿಮ್ಮೈಗೆ ಮಂದವಾಗಿ
ಎಲ್ಲ ಹೆಣ್ಣಿನೊಳೆ ಬ್ರಹ್ಮಕೃತಿಗೆ ಹೊಸ ಹೊಚ್ಚ ಚೊಚ್ಚಿಲಾಗಿ ॥

೨೦

ಹೆಚ್ಚು ಮಾತು ಇರದಚ್ಚ ಅವಳೆ ತಿಳಿ ನನ್ನ ಪ್ರಾಣವೆಂದು
**ನನ್ನನಗಲಿ ಇಹಳೆಂತೊ ಇರುವವೊಲು ಚಕ್ರವಾಕಿಯೊಂದು** ॥
ಕಾಲ ಕಳೆದ ಹಾಗೆಲ್ಲ ಕಾಣುವಾತುರವು ಆಳವಾಗಿ
ಇಹಳು ಬೇರೆ ಪದ್ಮಿನಿಯೊ ಏನೋ ಚಳಿಕುಳಿರ ಸೋಂಕು ತಾಗಿ ॥

೨೧

ಅತ್ತು ಅತ್ತು ಮತ್ತತ್ತು ಕೆದರಿಕೊಂಡಿಹುದು ಕಣ್ಣ ಪೊಗರು
ಬೆಚ್ಚನುಸಿರನುಂಡುಂಡು ಸೊಪ್ಪೆಯಾಗಿಹುದು ತುಟಿಯ ಚಿಗುರು ॥
**ಗಲ್ಲದಲ್ಲಿ ಕೈ, ಓರೆ ಮೋರೆ, ನಿಡಿಗೂದಲುದ್ದ ಚಿಂತೆ**
ಮೋಡ ಮುಸುಕಲಿರೆ ಮಂಕುಗವಿದ ಆ ದೀನ ಚಂದ್ರನಂತೆ ॥

೨೨

ಅವಳು ಬೀಳುವಳೊ ನಿನ್ನ ಕಣ್ಗೆ ಆಚಾರದಲ್ಲಿ ತೊಡಗಿ
**ಸೊರಗಿ ಕಡ್ಡಿಯಾದವನ ನನ್ನ ಚಿತ್ರವನೆ ಬರೆದ ಹುಡುಗಿ** ॥
ಇಲ್ಲ ಕೇಳುತಿರಬಹುದು ಸಾಕುಸಾರಿಕೆಯ – "ಹೇಳೆ ಜೇನೇ
ಅವನ ಮುದ್ದು ನೀ, ನಿಮ್ಮ ಒಡೆಯರನು ಒಮ್ಮೆ ನೆನೆವೆಯೇನೇ ?" ॥





೨೨

ಇಲ್ಲ ಕೇಳುತಿರಬಹುದು ಸಾಕುಸಾರಿಕೆಯ

೨೩
ನನ್ನ ಕುರಿತು ಪದವೊಂದು ಕಟ್ಟಿ ಅದ ಹೇಳಲೆಣಿಸಿ ಜಾಣೆ
ತಾನೆ ರಚಿಸಿದಾ ಏರು-ಇಳುವುಗಳ ಕ್ರಮವ ಮರೆತು ತಾನೇ ॥
ತೊಟ್ಟು ಸುರಿವ ಕಂಬನಿಯ ತಂತಿಯನೆ ಮಿಡಿಯುತಿಹಳೊ ದೀನೆ
ಮಾಸುಬಟ್ಟೆ ತೊಟ್ಟವಳ ತೊಡೆಯೊಳಿರಬಹುದು ಬಿದ್ದ ವೀಣೆ ॥
೨೪
ಕಳೆದವೆಷ್ಟು ಇನ್ನುಳಿದವೆಷ್ಟು ದಿನವೆಂದು ಲೆಕ್ಕವಿಟ್ಟು
**ಹೊಸ್ತಿಲಕ್ಕೆ ಹೂವಿಟ್ಟು ನೋಡುವಳೊ ನಾನು ಹೋದ ತೊಟ್ಟು** ॥
ಇಲ್ಲ ಎದೆಯ ಮುಟ್ಟಿಳಿದ ಮೊದಲ ಸಂಗಗಳ ಸವಿವಳೇನೋ
ನಲ್ಲರಗಲೆ ನಲ್ಲೆಯರಿಗೆಲ್ಲ ಇವು ಆಟ .ಇಷ್ಟೆ ತಾನೋ ? ॥
೨೫
ಹಗಲು ಹೊತ್ತು ಹೋದೀತು ಕೆಲಸದಲಿ ಹೇಗೊ, ಬಲ್ಲೆ ನಾನು
ಇರುಳು ಅವಳ ಗತಿಯೇನೋ ? ಅಳುವದೋ ? ನೆನೆಯಲೊಲ್ಲೆ ನಾನು ॥
ನನ್ನ ಸುದ್ದಿ ಹೇಳಿದರೆ ಸಾಕು, ನೀನಿಣಿಕಿ ನೋಡು, ಪಾಪಾ
ಸ್ವಾ ನೆಲದೊಳೇ ನಿದ್ದೆಯಿಲ್ಲದೇ ಹೊರಳುತಿರುವ ತಾಪಾ ॥
೨೬
ಹೊರಳು ಮಗ್ಗುಲಗಲಿಕೆಯ ಹಾಸಿನಲಿ ಸೋತ ಮೈಯ್ಯ ಚೆಲ್ಲಿ
ಓರೆಯಾಗಿ ಬಿದ್ದಿರುವ ಚಂದ್ರಕಳೆಯಂತೆ ಪಡುವಲಲ್ಲಿ , ॥
ಯಾವ ಇರುಳು ನನ್ನೊಡನೆ ಬೇಟದಲಿ ಕ್ಷಣಿಕವಾಗಿ ಹೋಯ್ತು
ಅವಳಿಗದುವೆ ಬಿಸಿಯುಸಿರಿಯತ್ತು ಮುಗಿದೀತೆ ಎನುವೊಲಾಯ್ತು ॥
೨೭
ಇಂಪುಗರೆವ ಇಂದುವಿನ ಕಿರಣ ಜಾಳಾಂದ್ರದಿಂದ ಸುರಿಯೆ
ಆಸೆಗೂಡಿ ಹರಿದೋಡಿ, ನೋಡಿ, ಒಡೆದಂತೆ ಹಿಂದೆ ಸರಿಯೆ ॥
ಮುಚ್ಚಲಿಲ್ಲ , ಸರಿ, ಬಿಚ್ಚಲಿಲ್ಲ ಎನುವಂಥ ಕಮಲದಂತೆ
ಎವೆಯು ತೊಯ್ದು ಕಣ್ತೆರೆಯಲೊಲ್ಲದೇ ನಿಲ್ವಳೇನೋ ಭ್ರಾಂತೆ ॥
೨೮
ತುಟಿಯ ಚಿಗುರನೊಣಗಿಸುವ ಉಸಿರಿನಲೆ ಹಾರಿಸುವಳು ಎಲ್ಲಾ
ಎಣ್ಣೆ ಕಾಣದುರುಟಾದ ಮುಂಗುರುಳು ಒಲೆಯೆ ಗಲ್ಲಗಲ್ಲಾ ॥
ಕಣ್ಣ ತುಂಬ ಕಂಬನಿಯೆ ಆಗಿ, ಕುದಿಯುವಳೊ ತಾನು ಬೆಂದು
ನಿದ್ದೆ ಬಂದು, ಕನಸಾರೆ ಕಂಡು, ಸೇರೇನೆ ನನ್ನನೆಂದು ॥




೨೩

ನನ್ನ ಕುರಿತು ಪದವೊಂದು............................

೨೯



**ಅಗಲಿದಂತೆ ಕಟ್ಟಿತ್ತು ಮುಡಿಯು, ಬಿಚ್ಚಿತ್ತು ಹೆಳಲಮಾಲೆ**
**ಕೂಡಿದಂದು ಹಾಕೇನು ನಾನು, ಮುಡಿಸೇನು ಎಂದು ಬಾಲೆ ॥**
ಕಾದು ಇಹಳು, ಜಡೆಗಟ್ಟಿ ಗಲ್ಲಗಳನುಜ್ಜಿ ಅವುಗಳೊತ್ತೆ
ಸಮರುತಿಹಳು ಬೆಳೆದುಗುರಿನಿಂದೆ ಕೂದಲವ ಮತ್ತೆ ಮತ್ತೆ ॥

೩೦

ತೊಡಿಗೆ ತೊರೆದು ಹೆಣವಾಗಿ ಇಹಳೊ ನಾ ಹೇಳಲೇಕೆ ಬಣ್ಣಿ
ಹಾಸಿನಲ್ಲು ಮೈ ಹೊರಳುವಾಗಲೂ ನರಳುತಿಹಳೊ ಸಣ್ಣ ॥
ನೀನು ಕೂಡ ಅವ ಕಂಡ ಕೂಡಲೇ ಹನಿಸಿ ಬಿಡುವಿ ಕಣ್ಣ
**ಕರುಳುಯಿದ್ದ ಎದೆಗಾರರಾರಿದಕೆ ಕರಗದಿರುವರಣ್ಣ ? ॥**

೩೧

ನನ್ನಳೊಲೆದ ಆ ನಿನ್ನ ಅತ್ತಿಗೆಯ ಚಿತ್ತವಿಷ್ಟು ನೊಂದು
ತರ್ಕಿಸುವೆನು ಮೊದಲಗಲಿ ನನ್ನ ಇರಬಹುದು ಹೀಗೆ ಎಂದು ॥
**'ನಾನೆ ಕಾಮ, ಲೋಕೈಕ ಪತಿಯು' ಎನುವಂತೆ ಸತಿಯ ಲೀಲೆ**
**ಬಣ್ಣಿಸಿದೆನು ವಾಚಾಳಿಯಂತೆಯೋ ? ಹೇಳು ಕಂಡ ಮೇಲೆ ॥**

೩೨

ಕುರುಳು ಜೋತು, ಕುಡಿಗಣ್ಣು ಮುಚ್ಚಿ ; ಮಂಕಾಗಿ ಕಾಡಿಗಿರದೇ
ಮಧುವ ಕುಡಿಯದೊಣಕಾದ ನಯನ ಮುರಿ ಹುಬ್ಬಿನಾಟ ಮರೆದೇ ॥
ಹಾರಿ ತನ್ನ ಎಡಗಣ್ಣು, ಬೆಚ್ಚಿ ಬರಿ ಬಾನ ತುಂಬೆ ನೀನೋ
ಸುಳಿಯೆ ಮೀನ ಚಲಕಮಲದಂತೆ ಆ ಕಣ್ಣು ಕಾಂಬವೇನೊ ॥

೩೩

ಕೆಲಕೆ ಎಡಕೆ ಇನ್ನೂನು ಬಿದ್ದಿಹುದು–ಏನೊ ಕೆಟ್ಟ ಗಳಿಗೆ !
ನಡುವುಸುತ್ತಿನಾ ಮುತ್ತು ಮಾಲೆ ಸಿಕ್ಕನ್ನ ಉಗುರುಗಳಿಗೆ ॥
ಕಂಡು ಅದನು ಹೊಂಬಾಳೆದಿಂಡುದೊಡೆ ಅದಿರೆ, ನಾನು ಬಳಿಗೆ
ಇಲ್ಲ, ಗಳಿಗೆ ಕಳೆಯುವಳು ನನೆಸಿ ಆ ನೀರೆ ನಿರಿಗೆಗಳಿಗೆ ॥

೩೪

ನೀನು ಹೋದ ಆ ಹೊತ್ತೆ ನಿದ್ದೆ ಚಿತ್ತೈಸೆ ಅವಳ ನೋಡಾ
**ಮೇಘರಾಜ, ದಯೆಮಾಡಿ ತಡೆಯೊ ಹುಸಿ ಗುಡುಗು ಹಾಕಬೇಡಾ ॥**
ಹೇಗೊ ಕನಸಿನಲಿ ಸೇರಿ ನನ್ನ ಮುಗಿಬಿದ್ದು ಕೊರಳ, ಹುಚ್ಚಿ
**ಎದ್ದಾಳೊ ಬಾಲೆ ಬಿದ್ದಾಳೊ ಬೆದರಿ ಕೈ ಮಲಕು ಬಿಚ್ಚಿ ಬೆಚ್ಚಿ ॥**





೨೫

ಹಗಲು ಹೊತ್ತು ಹೋದೀತು............................



೩೫
ತಂಗಾಳಿ ಬೀಸಿ ತುಂತುರಿಸಿ ನೀನು ಎಚ್ಚರಿಸಿದಾಗ ಬಾಲೆ
ಮಳೆಯಾಗಿ ಮಿಂದ ಹೊಸ ಮೊಲ್ಲೆ ಮೂಸಿ ಮನ ವಾಸಿಯಾದ ಮೇಲೆ ॥
ಮಿಂಚಿನವನೆ ಹಿಗ್ಗಣ್ಣಿನವಳಿಗಾ ಬೆಳಕುಕಂಡಿಯಿಂದಾ
**ಮಾತನಾಡು ಗಂಭೀರವಾಗಿ ನಸು ಗುಡುಗು ಬೆಡಗಿನಿಂದಾ ॥**

೩೬
ಕೇಳು ಮಂಗಲೇ, ಬಂದೆ ನಾಥ–ಸ್ನೇಹಿತನು ಜಲದ ನಾನು
ಅವನ ಕುಶಲವನು ಎದೆಯೊಳಿರಿಸಿಕೊಂಡಿಹೆನು, ಕೆಲಸವೇನು ? ॥
ದೂರ ಹೋದ ದಾರಿಗರ ತರುವೆನವರವರ ಮಂದಿರಕ್ಕೆ
**ತಮ್ಮ ನಲ್ಲೆಯರ ಹೆಳಲ ಬಾಚಿ, ಹಳೆ ಹಿಣಿಲ ಬಿಡಿಸಲಿಕ್ಕೆ ॥**

೩೭
ಹೀಗೆ ಹೇಳುತಲೆ, ಸೀತೆ ಹನುಮನನು ಕಾಣುವಂತೆ ಕಂಡು
ನಿನ್ನ ಮಾತು ಎದೆಯುಬ್ಬಿ ಕೇಳುವಳೊ, ಅಪ್ಪ, ಇದಿರುಗೊಂಡು ॥
**ಪ್ರಿಯರ ಕುಶಲ ಸ್ನೇಹಿತರೆ ಹೇಳಿದರೆ ಕೇಳಬೇಕೆ ನ್ಯೂನ?**
**ಕಾಂತೆಯರಿಗೆ ಏಕಾಂತದಂತೆ ಕೂಟಕ್ಕು ಕಿಂಚಿದೂನ ! ॥**

೩೮
**ಹೇಳು ನಿನ್ನ ಧರ್ಮಕ್ಕೆ, ನನ್ನ ಭಾಗ್ಯಕ್ಕೆ, ರಾಜಾ, ಬಾಳು**
**ರಾಮಗಿರಿಗಳಲ್ಲಿರುವ ನಿನ್ನ ಸಂಗಾತಿಯೆಂದು ಹೇಳು ॥**
**ಒಳ್ಳಿತೇನೆ ಅಬಲೇऽ ಎಂದು ನನಗಾಗಿ ಕೇಳು ಕೂರ್ತು**
**ಕಷ್ಟ ಸುಲಭವಿರುವಂಥ ಪ್ರಾಣಿಗಳಿಗಿದೇ ಮೊದಲ ಮಾತು ॥**

೩೯
ನಿನ್ನ ಹಾಗೆ ಮೈ ಸೊರಗಿ, ಕಾದು, ಕಣ್ಣುರಿಸಿ, ಕಂಠ ಬಿಗಿದು
ಉಸಿರಿಗೆಟ್ಟು ನಿಟ್ಟುಸಿರು ಯೋಗದಲಿ ದೇಶದೆಲ್ಲೆ ಜಿಗಿದು ॥
ವೈರಿ ವಿಧಿಯು ಕಟ್ಟಿರಲು ದಾರಿ, ತೆರೆದಿದ್ದೆ ಹಾದಿ ಜಾಣೆ
ಭಾವದಿಂದ ಒಡಗೂಡ ಬಯಸಿದೆನೆ ನನ್ನ ಭಾವರಾಣಿ ॥





೩೭

ಹೀಗೆ ಹೇಳುತಲೆ, ಸೀತೆ............................



೪೦
ಏನೊ ಹೇಳುವಾ ನೆವನ ಮಾಡಿ ತುಟಿ ತಂದು ಕಿವಿಯ ಬಳಿಗೆ
ನಿನ್ನ ಸಖಿಯರಿದಿರಲ್ಲೆ ಒರಗಿರುತ್ತಿದ್ದೆ ಗಳಿಗೆ ಗಳಿಗೆ ॥
ಮಾತಿನಾಚೆ, ಕಣ್ಣಾಚೆ ನನ್ನವಳು, ಇಂದು ಬವಣೆಗೊಂಡೆ
**ಹೇಳು ನಾನು ನಿನ್ನಿದಿರು ಬಯಲಿನಲಿ ಹೀಗೆ ಕೂಗಿಕೊಂಡೆ ॥**

೪೧
ಬಳ್ಳಿಯಲಿ ಆ ಬಳುಕು ಮೈಯ್ಯು, ಹುಲ್ಲೆಯಲಿ ಬೆದುರುಗಣ್ಣು
ಮುಖದ ಛಾಯೆ ಚಂದ್ರನಲಿ, ಗರಿಗಳಲಿ ಹೆಳಲ ಭಾರವನ್ನು
ನದಿಯ ಹರಿತದಲಿ ಹುಬ್ಬು ಮುರಿತವನು ಕಾಣಬೇಕು ಎಂದೆ
ಇಷ್ಟು ಕೂಡ ಸಾದೃಶ್ಯ ಕಾಣದೆ, ಚಂಡಿ, ನೊಂದೆ, ಬೆಂದೆ ॥

೪೨
ಅರೆಗಳಲ್ಲಿ ಕೆಂಗಾವಿಯಿಂದ ಹುಸಿ ಮುನಿಸಿನವಳ ಬರೆದು
ನಿನ್ನ ಮೆಲ್ಲಡಿಗೆ ಕೆಡಹಿಕೊಳಲು ಬರುತಿರಲು, ಮುಂದುವರಿದು ॥
ಕಣ್ಣು ತುಂಬಿ ಕಂಗೆಡಿಸಿ ಕಂಬನಿಯ ಹಳ್ಳ ಹರಿದಿತಲ್ಲs
**ಚಿತ್ರದಲ್ಲಿ ಕೂಡುವದು ಕೂಡ ಆ ಇದಿಗೆ ಸೇರಲಿಲ್ಲs ॥**

೪೩
ಬಯಲಿನಲ್ಲಿ ತೋಳ್ದೆರೆದು ನಿನ್ನ ಬಿಗಿತಾಗಿ ಅಪ್ಪಿಕೊಂಡು
ಸಿಕ್ಕೆ ನೀನು ಹೇಗಾರೆ ಎಂದೆ, ನಾ ಕನಸುಗಳಲಿ ಕಂಡು ॥
**ಇದನು ನೋಡಿ ಮರುಮರುಗದಿರುವ ವನದೇವತೆಯರೆ ಅಲ್ಲಿ**
**ಮುತ್ತಿನಂಥ ಕಂಬನಿಯ ಸುರಿಸಿದರು ಚಿಗುರು ಚಿಗುರಿನಲ್ಲಿ ॥**

೪೪
ನನೆಯು ಮುರಿದು, ಚಿಗುರೊಡೆದು, ಬಿರಿದಿರುವ ದೇವದಾರು ಮರವು
ಅಂಟು ಸುರಿದ ನರುಗಂಪ ಕುಡಿದ ಕುಳಿಗಾಳಿಗೇನು ಭರವು ! ॥
ಸುಗುಣೆ ನಿನ್ನ ಮೈ ಮುಟ್ಟಿ ಬಂದಿತೋ ಏನೋ ಎಂದು ನಾನು
ಆ ಹಿಮಾದ್ರಿವಾತವನೆ ಇಲ್ಲಿ ಉಬ್ಬುಬ್ಬಿ ತಬ್ಬುತಿಹೆನು ॥





೪೨

ಅರೆಗಳಲ್ಲಿ ಕೆಂಗಾವಿಯಿಂದ..........................



೪೫
ಮೂರು ಜಾವ ಉದ್ದಿದ್ದ ಇರುಳು ಕ್ಷಣದಂತೆ ಕಳೆಯಬಹುದೇ
ಇಡಿಯ ಹಗಲು ಯಾವಾಗಲೂನು ದಿಗಿಲಾಗದಂತೆ ಇಹುದೇ ॥
ಇಂತು ಚಿತ್ತ ಕೈಗೂಡದಾಗ ಬಯಲಾಸೆಯಿಂದ ನೊಂದು
**ನಿನ್ನ ವಿರಹ ವ್ಯಥೆಯಿಂದ ಬೆಂದು,ಬದುಕಿಹೆನು ಹೇಗೊ ಇಂದು ॥**
೪೬
ಆದರೂನು ಹಿಡಿದಿರುವೆ ಜೀವ, ಏನೇನೊ ಲೆಕ್ಕ ಹಾಕಿ
ಸುಭಗೆ ಅಂಜಿ ನೀ ಸಾಯಬೇಡ, ಕಳೆ ಕಾಲ ಹೇಗೊ ನೂಕಿ ॥
**ಯಾರು ಬರಿಯ ಸುಖ, ಬರಿಯ ದು:ಖ ಪಟ್ಟವರು ಲೋಕದಲ್ಲಿ ?**
**ದೆಸೆಯು ಕೆಳಗೆ ಮೇಲಾಗಿ ತಿರುಗುವದು ಏಕಚಕ್ರದಲ್ಲಿ ॥**
೪೭
**ಹಾವು ಹಾಸಿಗೆಯ ಹರಿಯು, ತೊರೆವ ದಿನ, ಶಾಪ ಮುಗಿಯಲಹುದು**
ನಾಲ್ಕು ತಿಂಗಳನು ಕಣ್ಣು ಮುಚ್ಚಿ ನೀನಿನ್ನು ಕಳೆಯಬಹುದು ॥
ಬಳಿಕ ಬರುವೆ, ಇನ್ನುಳಿದ ಬಯಕೆಗಳು ಇರಲಿ ಏಕೆ ಚಿಂತೆ ?
ಬೆಳೆವ ತಿಂಗಳಲಿ ಇರುಳು ಇರುಳುಗಳ ಅದಕೆ ಕಳೆವೆವೆಂತೆ ॥
೪೮
ಒಮ್ಮೆ ನಿನಗೆ ದಿನದಂತೆ ಕೊರಳ ತಳಕಿರಿಸಿ ನಿದ್ದೆಯಂತೆ
**ತೋಳದಿಂಬಿನಲಿ ಹೊರಳಿ, ನೀನಳುತ ಏಕೊ ಎದ್ದೆಯಂತೆ ॥**
ಕೇಳಕೇಳುತಿರೆ ಏನು ಎಂದು ಒಳನಕ್ಕು ಅಂದೆಯಂತೆ :-
**"ಕಂಡೆ ಕನಸಿನಲಿ, ಕಳ್ಳ, ನೀನು ಯಾವಳನೊ ಕೂಡಿದಂತೆ" ॥**
೪೯
ಕುಶಲನಿರುವೆ ನಾನಿಲ್ಲಿ ನಿನ್ನನೇ ನೆನೆದು ಧೈರ್ಯತಾಳಿ
ನೀನು ಕೂಡ ಎದೆಗೆಡಿಸಿಕೊಳ್ಳದಿರು ಏನೊ ಸುದ್ದಿ ಕೇಳಿ ॥
**ಅಗಲಿದಾಗ ತಿನ್ನುವದು ಸ್ನೇಹವೆನ್ನುವರು ಜೀವವನ್ನು**
**ಕೂಡಿದೊಡನೆ ಅದೆ ಸೂರೆ ಮಾಡುವದು ಪ್ರೇಮಭಾವವನ್ನು ॥**





೫೦

ಮೊದಲ ವಿರಹದಲಿ ಬೆಂದ ಸಖಿಗೆ ನೀ ಹೀಗೆ ಧೈರ್ಯಹೇಳಿ
ಶಿವನ ಬಸವ ನಗೆದಿರುವ ನಗದ ತುದಿಯಿಂದ ಕಾಲ ಕೀಳಿ ॥
**ಮರಳಿ ಬಂದು, ಅವಳೊಸಗೆ ತಂದು, ನನಗೊಂದು ಬಾಳ ನೀಡು**
**ಕಳಚಿ ಬೀಳಲಿಹ ಕುಂದಕುಸುಮದೊಲು ಇಹುದು ನನ್ನ ಪಾಡು ॥**

೫೧

ಒಪ್ಪಿಕೊಂಡೆಯಾ, ಅಪ್ಪಾ , ಹೇಳು ಈ ಬಂಧುಕೃತ್ಯವನ್ನು
ಇಲ್ಲವೆಂದು ನಾ ತಿಳಿಯೆ ನಿನ್ನ ಗಂಭೀರ ಮೌನವನ್ನು ॥
ನೀರ ನೀಡಿ ಚಾದಗೆಗೆ, ಸುಮ್ಮನಿಹೆ. ಬೇರೆ ಸಾಕ್ಷ್ಯ ಬೇಕೆ
**ತಮ್ಮ ಇಷ್ಟದವರಿಷ್ಟ ಮಾಡುವವ ಬಾಯಲಾಡಲೇಕೆ ? ॥**

೫೨

ಸಿಕ್ಕ ಹಾಗೆ ನಾ ಬೇಡಿಕೊಂಡೆ, ಮಾಡಿಷ್ಟು ನನ್ನದನ್ನು
ಎನ್ನು ಗೆಳೆಯನಿವ, ಎನ್ನು ಅಗಲಿದವ, ಅಯ್ಯೋ ಪಾಪ, ಎನ್ನು ॥
ತಿಳಿದ ನಾಡು ತಿರುಗಾಡು ಮೇಘವೇ ! ಮಾಟ ಆಟವಾಡಿ
**ಬೇಡಿಕೊಂಬೆ ನಾ ಇರಲಿ ಎಂದಿಗೂ ಮೋಡ ಮಿಂಚುಗೂಡಿ ॥**



# ಕೃತಜ್ಞತೆ



೧
ನನ್ನ ಮನದ ಕಜ್ಜಳವ ಕಳೆದು ಹೊಸ ಬೆಳಕು ಹೊತ್ತಿ ಕುಡಿಗೆ
ನಾನು ಹಿಗ್ಗಿದೆನು ನಿನ್ನ ಕೃತಿಯನಿಟ್ಟಂತೆ ನನ್ನ ಮುಡಿಗೆ ॥
**“ಹೋಗು ಸುಕವಿ-ರಸ-ದಾಸಿಯಾಗಿ ದುಡಿ” ಎಂದೆ ನನ್ನ ನುಡಿಗೆ**
ಮಾತಿನಲ್ಲೆ ಮೂಲೋಕ ಸೃಜಿಸುವಾ ನಿನ್ನ ಪ್ರತಿಭೆಯಡಿಗೆ

೨
ಹಿಂದಾಗಲಿಲ್ಲ, ಮುಂದಾಗಲಾರ, ಕವಿ ಕಾಳಿದಾಸ ನೀನು !
ಶೃಂಗಾರದಿಂದೆ ನವಭಕ್ತಿರಸವ ಹೊಮ್ಮಿಸುವ ದಿವ್ಯಭಾನು !
ರಸವತಿಯು ನಿನ್ನ ಸರಸತಿಯು, ಸವಿಗೆ ತುಟಿಮುದ್ದು ಹಾಲು ಜೇನು !
**ಕನ್ನಡದೊಳಿಂದು ಕನ್ನಡಿಸಿದಂತೆ ಮೂಡಿರುವಳಿಲ್ಲಿ ತಾನು !**



---

**ಶಬ್ದಾರ್ಥ:** ಕಿರುವಕ=ಕೆಂಪುಹೂವಿನ ದೊಡ್ಡ ಗೋರಂಟಿ. ನೀರು=ನೀರಿಗೆ ಮಡಿಕೆ. ನೀವಿಬಂಧ=ಸೀರೆಯ ಉಡುವಾಗ ಹಾಕುವ ಗಂಟು. ಕಂಡಿ=ರಂಧ್ರ. ತಿಗುರು=ಸುಗಂಧ ದ್ರವ್ಯ. ಬಿದಿರಿ=ಹರಡಿ, ವಿಸ್ತರಿ ಮುರುಕ=ಮುಖವಿನ್ಯಾಸ. ತಿರುಪಾಟ=ಆವರ್ತ. ಕಾರಣೆ=ಬಣ್ಣದ ಗೆರೆ. ನನೆ=ಮೊನೆಹಲ್ಲು , ಹರಿತವಾದ ಹಲ್ಲು ಕುಳಿರ್=ತಂಪು. ಪೊಗರು=ಹೊಳಪು. ಜಾಳಂದ್ರ=ಜಾವಂದ್ರ=ಬಲೆಯಂತೆ ರಂಧ್ರಗಳುಳ್ಳ ಕಿಟಕಿ ಸಮರು=ಅಂದಗೊಳಿಸು. ಮಲಕು=ತಿರುವು, ಸರಗಂಟು. ಜಲದ=ಮೋಡ. ಹಿಣಿಲ=ಜಡೆಯ ಹೆಣಿ ಕೂರ್ತು=ಕುಳಿತು, ಪ್ರೀತಿಯಿಂದ. ದಿಗಿಲ್=ಭಯ, ಅಂಜಿಕೆ, ವಿಸ್ಮಯ. ಸೂರೆಮಾಡು=ಲೂಟಿಮಾಡು

# ಅಂಬಿಕಾತನಯದತ್ತರ ಮೇಘದೂತದಿಂದ ಅಂದಿನ ಭಾರತ ಮೇಘದೂತ ಮಾಡಿದ ಪ್ರವಾಸದ ನಕ್ಷೆ ಹೀಗಿದೆ

(ಡಾ॥ ಎಸ್. ಕೆ. ಜೋಷಿ ಸಿದ್ಧಪಡಿಸಿದ್ದು)

ಊರುಗಳು (ತಾಣಗಳು)

ಪಂಚವಟಿ (ರಾಮಗಿರಿ)

ಉಜ್ಜೈನಿ

ವಿದಿಶಾ

ದೇವಗಿರಿ

ಕುರುಕ್ಷೇತ್ರ

ಅಲಕಾಪುರ

ಮಾನಸ ಸರೋವರ




ನದಿಗಳು

ರೇವತಿ

ನಿರ್ವಿಂದ್ಯಾ

ಗಂಗಾ

ಗಂಭೀರಾ

ಸರಸ್ವತಿ

ನೇತ್ರಾವತಿ

# * ಕಾಳಿದಾಸ

೧

ನಾನೊಬ್ಬನುಂಟು ಹಲವಾಗಲೆಲ್ಲೊ ಎಂಬ
ಹಂಬಲಿನ ಹಂಬೆ ಹರಿಬಳ್ಳಿವಳ್ಳಿಗಳಾಗಿ
ತನ್ನ ದಾಂಗುಡಿಯ ಗೊನೆ ಬಾನು ಮಣ್ಣೊಂದಾಗಿ
ಒಂದಾಗಿ ಕೆಲವಾಗಿ ಇರುವ ಹರುಹಿನ ತುಂಬ
ನಲಿವುಲಿವು ಒಲುಮೆ ಸೆಲೆ ಚೆಲುವು ಹಂದಿರಗಂಬ–
ವೆನೆ ತಾನೆ ಹೂ, ಹಕ್ಕಿ, ಹೆಣ್ಣು ಕಣ್ಣೆಂದಾಗಿ
ನೀಡಿ ಬಾನ್‌ಮೀನಂಗಳಲ್ಲು ಚಳಮಿಳನಾಗಿ
ಆಗ ಬಗೆಬಗೆ ಮಿಂಚಿತ್ತು ಒಂದೇ ಬಿಂಬ.
ಕಣ್ವ ಕವಿಗಣ್ಣ ಕನ್ನಡಿಯಲ್ಲಿ ಒಳಮೂಡಿ.

೨

ಆ ಕಾವ ನೋವೆ ಹಲವೊಲವಿನಲಿ ಹಾಡಾಗಿ
ಯಾವುದೋ ಹಿರಿಬೆಳಕ ಮಿಸುಕಾಟವೇ ಹಿಗ್ಗಿ
ಇಲ್ಲದುಂಟಾಗಿ ಕತ್ತಲೆಯು ಬೆಳಕಿಗೆ ಬಾಗಿ
ಸಾವು ಸುಲಿಯಲು ಬಾಳೆ ತಿಳಲು ಎನೆ ಸವಿಗೂಡಿ
ಮುದ್ದಾಟವೆನೆ ಬಂತು ಕಾಳಿದಾಸನ ನುಗ್ಗಿ .

– ಮುಕ್ತಕಂಠ–೮/ಪ್ರ : ೧೯೫೭



---

**ಭಾವ :** ಕಾಳಿದಾಸನಲ್ಲಿ ಅವತರಿಸಿದ ಶಕ್ತಿಯನ್ನು ಕುರಿತು ಬರೆದದ್ದು.

**ಅರ್ಥ :** ಹಂಬೆ–ಹಂಬು=ಬಳ್ಳಿ.
ದಾಂಗುಡಿ=ಬಳ್ಳಿಯ ಬೆಳವಣಿಗೆಯ ಮುಂಭಾಗದ ತುದಿ.
ಚಳಮಿಳ=ಚಂಚಲವಾಗಿ ಹೊಳೆ.
ಮಿಸುಕಾಟ=ಚಲನೆ.

* ಕಾಳಿದಾಸನನ್ನು ಕುರಿತು ಡಾ॥ ದ. ರಾ. ಬೇಂದ್ರೆ

